# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ)
ಹದಿನೈದನೇ ಅಧಿವೇಶನ

## ಕಾರ್ಯಕಲಾಪಗಳ ಪಟ್ಟಿ

ಶುಕ್ರವಾರ, ದಿನಾಂಕ 24ನೇ ಫೆಬ್ರವರಿ, 2023
(ಸಮಯ: ಬೆಳಿಗ್ಗೆ 10.30 ಗಂಟೆಗೆ)

----

### 1. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಒಂಭತ್ತನೇ ಪಟ್ಟಿ

ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಒಂಭತ್ತನೇ ಪಟ್ಟಿ

### 2. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

ಮಾನ್ಯ ಸದಸ್ಯರುಗಳಿಗೆ ಪ್ರತ್ಯೇಕವಾಗಿ ಕಳುಹಿಸಲಾಗಿರುವ ಐದನೇ ಪಟ್ಟಿ ರೀತ್ಯಾ

### 3. ಶಾಸನ ರಚನೆ

**ವಿಧೇಯಕಗಳನ್ನು ಪರ್ಯಾಲೋಚಿಸುವುದು ಮತ್ತು ಅಂಗೀಕರಿಸುವುದು**

**ಶ್ರೀ ಬಸವರಾಜ ಬೊಮ್ಮಾಯಿ (ಮಾನ್ಯ ಮುಖ್ಯಮಂತ್ರಿಗಳು) ಅವರು:-**

ಅ) 2023ನೇ ಸಾಲಿನ ಕರ್ನಾಟಕ ನ್ಯಾಯವಾದಿಗಳ ಮೇಲಿನ ಹಿಂಸಾಚಾರ ನಿಷೇಧ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

### 4. ಗಮನ ಸೆಳೆಯುವ ಸೂಚನೆಗಳು

1) **ಶ್ರೀ ಡಿ.ಕೆ. ಶಿವಕುಮಾರ್ ಅವರು** – ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಶಿವರಾಮ ಕಾರಂತ ಬಡಾವಣೆಯನ್ನು ನಿರ್ಮಿಸಲು ಸ್ವಾಧೀನಪಡಿಸಿಕೊಂಡ ಭೂಮಿ, ಬಡಾವಣೆ ನಿರ್ಮಿಸಿರುವ ವಿಸ್ತೀರ್ಣ, ಬಾಕಿ ಉಳಿದಿರುವ ವಿಸ್ತೀರ್ಣ, ಭೂ ಸ್ವಾಧೀನಪಡಿಸಿಕೊಂಡ ರೈತರಿಗೆ ಪ್ರತಿ ಎಕರೆಗೆ ನೀಡಿರುವ ಪರಿಹಾರ ಮೊತ್ತ, ಕಾಮಗಾರಿಯನ್ನು ನಿರ್ವಹಿಸಲು ಗುತ್ತಿಗೆಯನ್ನು ನೀಡಿರುವ ಕಂಪನಿ/ಏಜೆನ್ಸಿ, ಗುತ್ತಿಗೆಯನ್ನು ನೀಡುವಾಗ ಅನುಸರಿಸಿರುವ ಮಾನದಂಡ, ಬಡಾವಣೆಯ ನಿರ್ಮಾಣದ ಹಂತ ಇವುಗಳ ವಿವರ ಹಾಗೂ ಟೆಂಡರ್ ಪ್ರಕ್ರಿಯೆಯಲ್ಲಿ ನಡೆದಿರುವ ಅವ್ಯವಹಾರ ಕುರಿತು ಕ್ರಮ ಕೈಗೊಳ್ಳದಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

..2/

2) **ಶ್ರೀಯುತರುಗಳಾದ ಹೆಚ್.ಕೆ. ಕುಮಾರಸ್ವಾಮಿ, ಕೆ.ಎಸ್. ಲಿಂಗೇಶ್, ಸುರೇಶ್ ಗೌಡ ಹಾಗೂ ಇತರರು** – ಹಾಸನ ನಗರ ಸಭೆಗೆ ವಿವಿಧ ಗ್ರಾಮಗಳನ್ನು ಸೇರ್ಪಡೆ ಮಾಡಿ ಆದೇಶವಾಗಿದ್ದರೂ ಕೆಲವು ಗ್ರಾಮ ಪಂಚಾಯತಿಗಳಲ್ಲಿ ನಿಯಮಬಾಹಿರವಾಗಿ ಕೋಟ್ಯಾಂತರ ರೂಪಾಯಿ ಬೆಲೆ ಬಾಳುವ ಸಿ.ಎ. ನಿವೇಶನಗಳನ್ನು ವಿವಿಧ ಸಂಘಗಳಿಗೆ ನೀಡಿರುವ ಕುರಿತು ಸಮಗ್ರವಾಗಿ ತನಿಖೆ ಮಾಡಿ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

3) **ಶ್ರೀ ಹೆಚ್. ಹಾಲಪ್ಪ ಹರತಾಳು ಅವರು** – ಸಾಗರ ತಾಲ್ಲೂಕಿನ ವಿವಿಧ ಗ್ರಾಮಗಳ ಕಂದಾಯ ಭೂಮಿಯನ್ನು ಉಳುಮೆ ಮಾಡಿಕೊಂಡಿರುವ ಜಾಗವನ್ನು ಅಂಬಾರಗೋಡು ಜೀವವೈವಿಧ್ಯ ತಾಣವನ್ನಾಗಿ ಘೋಷಿಸಿ ರೈತರನ್ನು ಒಕ್ಕಲೆಬ್ಬಿಸುತ್ತಿರುವ ಬಗ್ಗೆ ಮಾನ್ಯ ಜೀವಿಶಾಸ್ತ್ರ ಮತ್ತು ಪರಿಸರ ಹಾಗೂ ಪ್ರವಾಸೋದ್ಯಮ ಸಚಿವರ ಗಮನ ಸೆಳೆಯುವುದು.

4) **ಶ್ರೀ ಹೆಚ್.ಕೆ. ಕುಮಾರಸ್ವಾಮಿ ಅವರು** – ಹಾಸನ ಜಿಲ್ಲೆ ಆಲೂರು ತಾಲ್ಲೂಕು ಮಲ್ಲಾಪುರ ಗ್ರಾಮಕ್ಕೆ ಮಂಜೂರಾಗಿರುವ ಅಂಬೇಡ್ಕರ್ ವಸತಿ ಶಾಲೆಯ ಕಾಮಗಾರಿಯನ್ನು ಪ್ರಾರಂಭಿಸುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

5) **ಶ್ರೀ ಗುತ್ತೇದಾರ್ ಸುಭಾಷ ರುಕ್ಮಯ್ಯ ಅವರು** – ಬೆಂಗಳೂರು ನಗರ ಜಿಲ್ಲೆಯಲ್ಲಿ ಕಿವುಡ ಮಕ್ಕಳ ಸರ್ಕಾರಿ ವಸತಿಯುತ ಶಾಲೆಯನ್ನು ಪ್ರಾರಂಭಿಸುವ ಬಗ್ಗೆ ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರ ಗಮನ ಸೆಳೆಯುವುದು.

6) **ಶ್ರೀ ಹೆಚ್.ಕೆ. ಪಾಟೀಲ ಅವರು** – ಗದಗ ವೈದ್ಯಕೀಯ ವಿಜ್ಞಾನ ಸಂಸ್ಥೆಯಲ್ಲಿ ಸ್ವೈಪಂಡರಿ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಶುಶ್ರೂಷ ಅಧಿಕಾರಿಗಳನ್ನು ಗುತ್ತಿಗೆ ಆಧಾರಿತ ನೌಕರರೆಂದು ಪರಿಗಣಿಸುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

7) **ಶ್ರೀ ಸಾ.ರಾ ಮಹೇಶ್ ಅವರು** – ರಾಜ್ಯದಲ್ಲಿ ಅಗ್ರಿಗೋಲ್ಡ್ ಕಂಪನಿಯಲ್ಲಿ ಹಣ ಹೂಡಿಕೆ ಮಾಡಿರುವ ಲಕ್ಷಾಂತರ ಗ್ರಾಹಕರು ಹಾಗೂ ಏಜೆಂಟರುಗಳ ಪರವಾಗಿ ಸೂಕ್ತ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

8) **ಶ್ರೀ ಎಸ್. ರಾಮಪ್ಪ ಅವರು** – ಹರಿಹರ ನಗರಸಭಾ ವ್ಯಾಪ್ತಿಯಲ್ಲಿ ಜಿ+2 ಮನೆಗಳನ್ನು ನಿರ್ಮಾಣ ಮಾಡುವ ಬಗ್ಗೆ ಮಾನ್ಯ ವಸತಿ ಹಾಗೂ ಮೂಲಸೌಲಭ್ಯ ಅಭಿವೃದ್ಧಿ ಸಚಿವರ ಗಮನ ಸೆಳೆಯುವುದು.

**ಎಂ.ಕೆ. ವಿಶಾಲಾಕ್ಷಿ**
**ಕಾರ್ಯದರ್ಶಿ**

---

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ಅಂತರ್ಜಾಲದ ಈ ವಿಳಾಸದಲ್ಲಿ ಪಡೆದುಕೊಳ್ಳಬಹುದು
***http://kla.kar.nic.in/assembly/lob/lob.htm***